## 1ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1094

ಸದಸ್ಯರ ಹೆಸರು : ಶ್ರೀ ಎನ್.ಎಸ್. ಬೋಸ್‌ರಾಜು

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 13-03-2020

<table>
<tr><th>ಕ್ರ.ಸ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಯಚೂರು ವಿಭಾಗದಲ್ಲಿರುವ ಸಂಚಾರ ಮಾಡುತ್ತಿರುವ ಒಟ್ಟು ಬಸ್ಸುಗಳ ಸಂಖ್ಯೆ ಎಷ್ಟು; ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಒಟ್ಟು ಚಾಲಕ ಮತ್ತು ನಿರ್ವಾಹಕರ ಹುದ್ದೆಗಳು ಎಷ್ಟು; ಖಾಲಿ ಇರುವ ಹುದ್ದೆಗಳು ಎಷ್ಟು; ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;</td><td>ರಾಯಚೂರು ವಿಭಾಗದಲ್ಲಿ ದಿನಾಂಕ: 05.03.2020 ರಂದು ಇದ್ದಂತೆ ಒಟ್ಟು 660 ವಾಹನಗಳು ಇರುತ್ತವೆ.<br><br>ರಾಯಚೂರು ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಚಾಲಕ ಮತ್ತು ನಿರ್ವಾಹಕರ ಹುದ್ದೆಗಳ ಮಂಜೂರಾತಿ, ಕಾರ್ಯನಿರ್ವಹಣೆ ಮತ್ತು ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಗಿನಂತಿರುತ್ತದೆ.<br><br>
<table>
<tr><th>ಹುದ್ದೆ</th><th>ಮಂಜೂರಾತಿ</th><th>ಕಾರ್ಯನಿರ್ವಹಣೆ</th><th>ಖಾಲಿ ಸ್ಥಾನಗಳು</th></tr>
<tr><td>ಚಾಲಕ ಮತ್ತು ನಿರ್ವಾಹಕ</td><td>1993</td><td>1959</td><td>-34</td></tr>
</table>
<br>ರಾಯಚೂರು ವಿಭಾಗ ಒಳಗೊಂಡಂತೆ, ಒಟ್ಟು ಈ.ಕ.ರ.ಸಾ.ಸಂಸ್ಥೆಯಲ್ಲಿ ಖಾಲಿ ಇರುವ 2312 ಚಾಲನಾ ಸಿಬ್ಬಂದಿಗಳ ಹುದ್ದೆಗಳ ಪೈಕಿ 1619 ಚಾಲಕ ಮತ್ತು ಚಾಲಕ-ಕಂ-ನಿರ್ವಾಹಕ ಹುದ್ದೆಗಳ ಭರ್ತಿಗಾಗಿ ಈಗಾಗಲೇ ಅಧಿಸೂಚನೆ ಹೊರಡಿಸಲಾಗಿದೆ. ಇನ್ನುಳಿದ 693 ನಿರ್ವಾಹಕ ಹುದ್ದೆಗಳ ಭರ್ತಿಗೆ ಶೀಘ್ರದಲ್ಲಿ ಕ್ರಮ ವಹಿಸಲಾಗುತ್ತದೆ.<br><br>ನೇಮಕಾತಿ ಪ್ರಕ್ರಿಯೆ ಪೂರ್ಣಗೊಂಡ ನಂತರ ಅವಶ್ಯಕತೆಗೆ ಅನುಗುಣವಾಗಿ ಕೊರತೆ ಇರುವ ಚಾಲನಾ ಸಿಬ್ಬಂದಿಗಳನ್ನು ನಿಯೋಜಿಸಲು ಕ್ರಮ ಕೈಗೊಳ್ಳಲಾಗುತ್ತದೆ.</td></tr>
<tr><td>ಆ</td><td>ರಾಯಚೂರು ವಿಭಾಗದಲ್ಲಿ 8 ಲಕ್ಷ ಕಿ.ಮೀ. ಸಂಚರಿಸಿರುವ ಸಂಚಾರ ಬಸ್ಸುಗಳು ಎಷ್ಟು; (Running period Buses) ಇವುಗಳ ಬದಲಾವಣೆ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು?</td><td>ರಾಯಚೂರ ವಿಭಾಗದಲ್ಲಿ 8 ಲಕ್ಷ ಕಿ.ಮೀ. ಕ್ರಮಿಸಿರುವ 331 ವಾಹನಗಳು ಇರುತ್ತವೆ.<br><br>ಸಂಸ್ಥೆಯಲ್ಲಿ ವಾಹನಗಳನ್ನು ನಿಷ್ಕ್ರಿಯಗೊಳಿಸಲು ಅಶೋಕ ಲೀಲ್ಯಾಂಡ, ಟಾಟಾ ಮೋಟಾರ್ಸ್, ಐಶರ್ ಮತ್ತು ತತ್ಸಮಾನ ಮಾದರಿಯ ವಾಹನಗಳ ಜೀವಿತಾವಧಿಯನ್ನು 9.00 ಲಕ್ಷ ಹಾಗೂ ಹವಾನಿಯಂತ್ರಿತ ಕರೋನಾ ಸ್ಲೀಪರ್ ವಾಹನದ ಜೀವಿತಾವಧಿಯನ್ನು 11.00 ಲಕ್ಷ ಕಿ.ಮೀ. ಗೆ ನಿಗದಿಪಡಿಸಲಾಗಿದ್ದು, ನಿಗದಿತ ಕಿ.ಮೀ. ಕ್ರಮಿಸಿದ ನಂತರ ಅವುಗಳ ಭೌತಿಕ/ತಾಂತ್ರಿಕ ಸ್ಥಿತಿಗತಿಯ ಆಧಾರದ ಮೇಲೆ ನಿಷ್ಕ್ರಿಯೆಗೊಳಿಸಲಾಗುತ್ತದೆ.<br><br>ಪ್ರಸಕ್ತ ಸಾಲಿನಲ್ಲಿ ಕ್ರಿಯಾ ಯೋಜನೆಯ ಪ್ರಕಾರ 350 ವಾಹನಗಳನ್ನು ಖರೀದಿಸಲು ಯೋಜಿಸಿದ್ದು, ಈ ಪೈಕಿ 50 ವಾಹನಗಳು ಮಾರ್ಚ-2020ರ ಅಂತ್ಯದಲ್ಲಿ ಸೇರ್ಪಡೆಗೊಳ್ಳಲಿವೆ. ಕೇಂದ್ರ ಸರ್ಕಾರವು ಏಪ್ರಿಲ್-2020ರಿಂದ ಬಿ.ಎಸ್.-6 ಮಾಪನ ಜಾರಿಗೊಳಿಸಿರುವುದರಿಂದ, ಇನ್ನುಳಿದ 300 ವಾಹನಗಳನ್ನು ಏಪ್ರಿಲ್-2020ರಿಂದ ಖರೀದಿಸಿ ಸೇರ್ಪಡೆಗೊಳಿಸಲಾಗುತ್ತಿದ್ದು, ರಾಯಚೂರು ವಿಭಾಗಕ್ಕೆ ಅವಶ್ಯಕತೆಗನುಗುಣವಾಗಿ ಹೊಸ ವಾಹನಗಳನ್ನು ಒದಗಿಸಲು ಕ್ರಮ ಜರುಗಿಸಲಾಗುತ್ತದೆ.</td></tr>
</table>

ಸಂಖ್ಯೆ: ಟಿಡಿ 85 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು